ಸನ್ ೧೯೩೩ ನೇ ಇಸ್ವಿಯ ಮುಂಬಯಿ ಸರಕಾರದ
ಗ್ರಾಮ ಪಂಚಾಯತಿ ಅಕ್ಟ ಕಲಮು ೧೦೮ ಪೋಟ ಕಲಮು
(೧) ಕ್ಲಾಜ (೨ ೨) ಅನ್ವಯ ಮಾಡಿದ

ಸನ್ ೧೯೫೧ನೇ ಇಸ್ವಿಯ ಮುಂಬಯಿ ಸರಕಾರದ

# ಪ್ರಾವ್ಹಿಡೆಂಟ ಫಂಡ ಕಾಯದೆ



*



೧೯೫೧

*

ಭಾರತ ಬುಕ್ ಡಿಪೊ,
ಧಾರವಾಡ.



[೦-೧೦-೦

# ಸನ್ ೧೯೫೧ನೇ ಇಸ್ವಿಯ ಮುಂಬಯಿ ಸರಕಾರದ ಗ್ರಾಮ ಪಂಚಾಯತಿ ಪ್ರಾವ್ಹಿಡೆಂಟ ಫಂಡಿನ ಬಗ್ಗೆ ಕಾನೂನು.



(ಸನ್ ೧೯೫೧ನೇ ಇಸ್ವಿಯ ಜೂನ ತಿಂಗಳದ ಲೋಕಲ್ ಸೆಲ್ಫ ಗವ್ಹರ್ನಮೆಂಟ ಮತ್ತು ಹೆಲ್ತ ಡಿಪಾರ್ಟಮೆಂಟಿನ ಜಾಹೀರ ನಾಮೆ ನಂಬರ ಎಸ್ ೧೨೪ (೮೧) ನೋಡಿರಿ.)

ಸನ್ ೧೯೩೩ನೇ ಇಸ್ವಿಯ ಮುಂಬಯಿ ಸರಕಾರದ ಗ್ರಾಮ ಪಂಚಾಯತಿ ಆಕ್ಟ ಕಲಮು ೧೦೮ ಪೋಟ ಕಲಮು (೨) ಕ್ಲಾಜ (೮೮) ರನ್ವಯ ಕೊಟ್ಟ ಅಧಿಕಾರವನ್ನು ನಿರ್ವಹಿಸಿ ಮುಂಬಯಿ ಸರಕಾರವು ಮುಂದಿನ ಕಾನೂನುಗಳನ್ನು ಮಾಡುತ್ತದೆ. ಅವು ಕೆಳಗಿನಂತೆ:—

೧. ಸಣ್ಣ ಶಿರೋನಾಮೆ:— ಈ ಕಾನೂನುಗಳಿಗೆ ಸನ್ ೧೯೫೧ನೇ ಇಸ್ವಿಯ ಮುಂಬಯಿ ಸರಕಾರದ ಗ್ರಾಮ ಪಂಚಾಯತಿ ಪ್ರಾವ್ಹಿಡೆಂಟ ಫಂಡ ಕಾನೂನು ಎಂದು ಕರೆಯಬಹುದು.

೨. ವ್ಯಾಖ್ಯೆಗಳು:— ಈ ಕಾನೂನಿನಲ್ಲಿ ವಿಷಯ ಮತ್ತು ಸಂದರ್ಭಕ್ಕೆ ಬಾಧೆ ಬಾರದೆ ಇದ್ದ ಪಕ್ಷದಲ್ಲಿ:—

(ಅ) 'ಆಕ್ಟ' ಅಂದರೆ ಸನ್ ೧೯೩೩ನೇ ಇಸ್ವಿಯ ಮುಂಬಯಿ ಸರಕಾರದ ಗ್ರಾಮ ಪಂಚಾಯತಿಯ ಆಕ್ಟ.

(ಬ) 'ಕುಟುಂಬ' ಅಂದರೆ:—

(೧) ಪುರುಷ ನೌಕರನ ಬಗ್ಗೆ ನೌಕರನ ಹೆಂಡತಿ ಅಥವಾ ಹೆಂಡಂದಿರು ಮತ್ತು ಮಕ್ಕಳು ಮತ್ತು ನೌಕರನ ಮೃತಮಗನ ವಿಧವಾ ಹೆಂಡತಿ ಅಥವಾ ಹೆಂಡಂದಿರು ಮತ್ತು ಮಕ್ಕಳು.

(೨) ಸ್ತ್ರೀ ನೌಕರರ ಬಗ್ಗೆ ಆಕೆಯ ಗಂಡ ಮತ್ತು ಮಕ್ಕ
ಮತ್ತು ಅವಳ ಸ್ವೈತಮಾನ ವಿಧವಾ ಹೆಂಡತಿ ಅಥವಾ ಹೆಂಡಂದಿರು ಮ
ಮಕ್ಕಳು.

ಕ್ಲಾಜ (೭) ದಲ್ಲಿಯ ಉದ್ದೇಶದ ಬಗ್ಗೆ 'ಮಕ್ಕಳು' ಅಂದರೆ ಔ
ಮಕ್ಕಳು.

ವರ್ಗಣಿದಾರನ ಧರ್ಮದ ಪ್ರಕಾರ ದತ್ತಕ ವಿಧಾನಕ್ರಮವು ಔ
ಸಂತತಿಯ ದರ್ಜೆಯನ್ನು ಪ್ರಾಪ್ತಮಾಡಿಕೊಡುವಂತಹದು ಎಂದು ಕಾಂ
ಶೀರ ರೀತಿಯಿಂದ ಮಾನ್ಯ ಮಾಡಲ್ಪಟ್ಟಿರುವ ಸಮಯದಲ್ಲಿ ಮಾತ್ರ, ದ
ತೆಗೆದುಕೊಂಡ ಮಗನು 'ಮಗ' ಎಂದು ತಿಳಿಯುವದರಲ್ಲಿ ಬರುವದು.

(ಕ) 'ಫಂಡ' ಅಂದರೆ ಕಾಯದೆಗೆ ಅನುಸಾರವಾಗಿ ಸ್ಥಾ
ಲ್ಪಟ್ಟ ಪ್ರಾವ್ಹಿಡೆಂಟ ಫಂಡ.

(ಡ) 'ನಮೂನೆ' ಅಂದರೆ ಈ ಕಾನೂನುಗಳಿಗೆ ಜೋ
ನಮೂನೆ.

(ಇ) ಕನಿಷ್ಠ ದರ್ಜೆಯ ನೌಕರ ಅಂದರೆ, ಪ್ರತಿ ತಿಂಗಳು
ರೂಪಾಯಿಗಳಿಗಿಂತಲೂ ಕಡಿಮೆ ಪಗಾರ ದೊರಕಿಸುವ ಪಂಚಾಯತಿ ನೌ
ಯಲ್ಲಿ ಇದ್ದ ವ್ಯಕ್ತಿ.

ಆದರೆ ಇದರಲ್ಲಿ ಸೆಕ್ರೆಟರಿ ಅಥವಾ ಕಾರಕೂನನ ಸಮಾವೇಶವಾಗ
ದಿಲ್ಲ.

**೩. ಫಂಡಿನ ವರ್ಗಣಿಯು ಕೆಲವರಿಗೆ ಐಚ್ಛಿಕ ಹಾಗ
ಕೆಲವರಿಗೆ ಕಡ್ಡಾಯವಾದದ್ದು ಇರುತ್ತದೆ.**

(೧) ಫಂಡಿನ ವರ್ಗಣಿಯು, ಪಂಚಾಯತಿಯ ಎಲ್ಲ ಕನಿಷ
ದರ್ಜೆಯ ನೌಕರರಿಗೆ ಐಚ್ಛಿಕವಾಗಿರುವದು.

(೨) ಸಬ್‌ರೂಲ (೧) ರಲ್ಲಿ ನಮೂದಿಸಿದ ನಿಯಮವನ್ನು
ಹೊರತುಪಡಿಸಿ, ನೌಕರಿಯಲ್ಲಿ ಕಾಯಂ ಮಾಡಲ್ಪಟ್ಟ ಎಲ್ಲ ನೌಕರರಿ
ಅಥವಾ ತೆರವಿದ್ದ ಕಾಯಂ ಜಾಗೆಗಳ ಮೇಲೆ ಪ್ರೊಬೇಶನ್‌ದ ಮೇಲೆ ನೇ
ಮಲ್ಪಟ್ಟ ನೌಕರರೆಲ್ಲರಿಗೆ, ಫಂಡದ ವರ್ಗಣಿಯು ಕಡ್ಡಾಯವಾದದ್ದಾಗಿರುವದ

**೪. ನೌಕರನು ಕೊಡುವ ವರ್ಗಣಿಯ ದರ ಮತ್ತು ಅದನ್ನ
ವಸೂಲಿ ಮಾಡುವ ಪದ್ಧತಿ:—**

(೧) ನೌಕರನು ಕೊಡತಕ್ಕ ಫಂಡಿನ ವರ್ಗಣಿಯು, ಒಂದೇ ದರದಂತೆ ಆತನ ತಿಂಗಳದ ಒಟ್ಟು ಪಗಾರದ ೧/೧೨ನೇ ಅಂಶದಷ್ಟು ಆಗುವದು; ಮತ್ತು ಅದರಲ್ಲಿ ಬಡ್ತಿಯ ಪಗಾರ, ವ್ಯಕ್ತಿಗತ ಪಗಾರ, ಅಥವಾ ವಿಶೇಷ ಪಗಾರ ಸಮಾವೇಶವಾಗುವದು. ಆದರೆ ಅದರಲ್ಲಿ ಉಳಿದ ಯಾವದೇ ತರದ ಅಲಾವನ್ಸಿನ ಸಮಾವೇಶವಾಗುವದಿಲ್ಲ. ಮತ್ತು ಪೂರ್ಣ ರೂಪಾಯಿಗಳನ್ನು ಮಾತ್ರ ಲೆಕ್ಕದಲ್ಲಿ ಹಿಡಿಯುವದರಲ್ಲಿ ಬರುವದು.

* ಫಂಡಿನ ಚಾಲೂ ವರ್ಗಣಿಯನ್ನು ನೌಕರನ ಪ್ರತಿ ತಿಂಗಳ ಪಗಾರದೊಳಗಿಂದ ಮುರಿದು ವಸೂಲ ಮಾಡುವದರಲ್ಲಿ ಬರುವದು

(೨) ಪಗಾರ ಮತ್ತು ಅಲಾವನ್ಸ ಸಹ ರಜೆಯ ಮೇಲೆ ಇದ್ದ ನೌಕರನಿಗೆ ಫಂಡಿನ ವರ್ಗಣಿಯನ್ನು ತುಂಬಲು ಬರುವದು.

ಬಿನ್ ಪಗಾರಿ ರಜೆಯ ಮೇಲೆ ಇರುವ ನೌಕರನಿಗೆ ಫಂಡಿನ ವರ್ಗಣಿಯನ್ನು ತುಂಬುವ ಹಕ್ಕು ಇರಲಾರದು.

(೩) ಸಸ್ಪೆಂಡ ಮಾಡಲ್ಪಟ್ಟ ನೌಕರನು ವಾಡಿಕೆಯ ದರದಂತೆ ಫಂಡದ ವರ್ಗಣಿಯನ್ನು ಕೊಡಬಹುದು.

(೪) ನೌಕರನ ಫಂಡದ ವರ್ಗಣಿಯನ್ನು ಆತನ ಮಾಸಿಕ ವೇತನದೊಳಗಿಂದ ವಸೂಲ ಮಾಡುವದರಲ್ಲಿ ಬರುವದು ಮತ್ತು ಅದು ವಸೂಲಾಗಿ ಬಾಕಿ ಉಳಿದ ನಕ್ತಿ ರಕಮನ್ನಷ್ಟೇ ಆತನಿಗೆ ಕೊಡುವದರಲ್ಲಿ ಬರುವದು.

**೫. ಪಂಚಾಯತಿಯು ಕೊಡತಕ್ಕ ಕಾಂಟ್ರಿಬ್ಯೂಶನ್‌ದ ರಕಮು:—**

ಪ್ರತಿ ತಿಂಗಳ ಪ್ರಾರಂಭಕ್ಕೆ ಸಂಬಂಧಿಸಿದ ನೌಕರನ ವರ್ಗಣಿಯಷ್ಟು ರಕಮನ್ನು ಪಂಚಾಯತಿಯು ಫಂಡಿಗೆ ಕೊಡುವದು.

ವರ್ಗಣಿದಾರನು ಮೃತ ಆದ ಸಂದರ್ಭದಲ್ಲಿ ಅಥವಾ ಕೆಲಸದಿಂದ ಮುಕ್ತ ಮಾಡಲ್ಪಟ್ಟ ಬಾಬತಿಯಲ್ಲಿ ಆ ನೌಕರನು ಆ ತಿಂಗಳಲ್ಲಿ ಕೆಲಸದ

ಟೀಪು ೧ ಉದಾಹರಣಾರ್ಥ.— ನೌಕರನು ಒಂದು ತಿಂಗಳಲ್ಲಿ ರೂ. ೩೧-೧೫-೦ ಪಗಾರ ತಕ್ಕೊಂಡರೆ ೩೧ ರೂಪಾಯಿಗಳ ಮೇಲೆ [illegible] ೨-೧೫-೦ ಪ್ರಾವ್ಹಿಡೆಂಟಫಂಡ ಮುರಿಯುತಕ್ಕದ್ದು.

ಸಿಂತಿ ಹಾಜರಿದ್ದ ದಿನ್ನ ಪ್ರಮಾಣದಲ್ಲಿ ಅಥವಾ ಆತನು ಆ ತಿಂಗಳ ತೆಕ್ಕೊಂಡ ಪಗಾರ ಅಥವಾ ರಜೆಯ ಪಗಾರದ ರಕಮಿನ ಪ್ರಮಾಣದಲ್ಲಿ ಪಂಚಾಯತಿಯು ಕೊಡತಕ್ಕ ರಕಮು ಆಗುವದು.

**೬. ಫಂಡಿನ ರಕಮನ್ನು ಲಾಭದ ಬಗ್ಗೆ ವಿನಿಯೋಗಿಸುವದು:-**

(೧) ಫಂಡಿನ ರಕಮನ್ನು ಪೋಸ್ಟಲ್ ಸೇವಿಂಗ್ಸ ಬ್ಯಾಂಕಿನಲ್ಲಿ ಠೇವು ಇಡತಕ್ಕದ್ದು.

ಪ್ರತಿಯೊಬ್ಬ ನೌಕರನ ಕಡೆಯಿಂದ ವಸೂಲಾದ ವರ್ಗಣಿ ಹಣ ಮತ್ತು ಪಂಚಾಯತಿಯಿಂದ ಕೊಡಲ್ಪಟ್ಟ ಹಣವನ್ನು, ನೌಕರರ ವತಿಯಿಂದ ಸರಪಂಚನ ಹೆಸರಿನಲ್ಲಿ ತೆರೆದ ಪೋಸ್ಟ ಆಫೀಸ ಸೇವಿಂಗ್ಸ ಬ್ಯಾಂಕ ಅಕೌಂಟಿಗೆ ಜಮಾ ಮಾಡುವದರ ಸಲುವಾಗಿ, ಸ್ಥಾನಿಕ ಪೋಸ್ಟ ಮಾಸ್ತರನಿಗೆ ಕೊಡತಕ್ಕದ್ದು. ಠೇವು ಇಟ್ಟ ತಿಂಗಳದ ಬಡ್ಡಿ ಸಿಗುವದರ ಸಲುವಾಗಿ, ಶಕ್ಯವಿದ್ದಷ್ಟು ಪ್ರತಿ ತಿಂಗಳ ೧೦ನೇ ತಾರೀಖಿನ ಪೂರ್ವದಲ್ಲಿ ಇಂಥ ರಕಮು ಕಳಿಸಲ್ಪಡುತ್ತಿರಬೇಕು. ಪಂಚಾಯತಿಯ ಸೆಕ್ರೆಟರಿಯು ರಕಮಿನ ಸಂಗಡ, ಸಂಬಂಧಿಸಿದ ವರ್ಗಣಿದಾರರ ಪಾಸ ಬುಕ್ಕು ಮತ್ತು ಕೆಳಗೆ ನಮೂದ ಮಾಡಿದ ನಮೂನೆಯಲ್ಲಿ ಒಂದು ತಕ್ತೆ ಪೋಸ್ಟ ಆಫೀಸಿಗೆ ಕಳಿಸಬೇಕು.

**ಗ್ರಾಮ ಪಂಚಾಯತಿಯ ಹೆಸರು:—**

**ತಿಂಗಳು—**

| ಪಾಸಬುಕ್ಕಿನಲ್ಲಿ ಇದ್ದ ಅಕೌಂಟ ನಂ. | ನೌಕರನ | | | ಪಂಚಾಯತಿಯು ಕೊಡತಕ್ಕ ಹಣ | ಪರತ ಕೊಟ್ಟ ಮುಂಗಡ ಹಣ | ಜಮಾ ಆಗತಕ್ಕ ಒಟ್ಟು ಹಣ |
|---|---|---|---|---|---|---|
| | ಹೆಸರು | ಮಾಸಿಕ ಪಗಾರ | ವರ್ಗಣಿ | | | |
| ೧ | ೨ | ೩ | ೪ | ೫ | ೬ | ೭ |
| | | | | | | |

ಪೋಸ್ಟ ಆಫೀಸಿನಲ್ಲಿ ಸ್ವೀಕರಿಸಲ್ಪಟ್ಟ ಹಣವು ಮೇಲಿನ ತಕ್ತೆಯಲ್ಲಿಯ ಎಂಟ್ರಿಗಳ ಪ್ರಕಾರ, ಪ್ರತಿಯೊಬ್ಬ ನೌಕರನ ಅಕೌಂಟಿಗೆ ಜಮಾ ಹಿಡಿಯಲ್ಪಡತಕ್ಕದ್ದು, ಮತ್ತು ಪಾಸ ಬುಕ್ಕುಗಳು ಪಂಚಾಯತಿ ಕಡೆಗೆ ತಿರುಗಿ ಕಳುಹಿಸಲ್ಪಡಬೇಕು. ಸೆಕ್ರೆಟರಿಯು ಪಾಸ ಬುಕ್ಕುಗಳಲ್ಲಿ ಮಾಡಿದ ಎಂಟ್ರಿಗಳು ತಕ್ತೆಯಲ್ಲಿಯ ಎಂಟ್ರಿಗಳಿಗೆ ಪ್ರಮಾಣೀಕರಿಸಿ ನೋಡತಕ್ಕದ್ದು.

(೨) ನೌಕರನ ತಾತ್ಪೂರ್ತಿಕ ಗೈರ ಹಾಜರಿಮೂಲಕ ಅಥವಾ ಬೇರೆ ಯಾವದಾದರೂ ಕಾರಣದ ಸಲುವಾಗಿ ಪಂಚಾಯತಿ ಕಡೆಯಿಂದ ಒಂದೇ ವೇಳೆಗೆ, ಜಮಾ ಮಾಡಲು ಶಕ್ಯವಿಲ್ಲದ ಪಕ್ಷದಲ್ಲಿ, ಅದನ್ನು ಅನಂತರದ ತಾರೀಖಿಗೆ ಒಂದೊಂದೇ ಅಥವಾ ಒಟ್ಟುಗೂಡಿಸಿ ಜಮಾ ಮಾಡಬಹುದು. ಮತ್ತು ಮೇಲೆ ಹೇಳಿದ ಪದ್ಧತಿಯಂತೆ ಪಾಸ ಬುಕ್ಕಿನಸಂಗಡ ಒಂದು ಬೇರೆ ಯಾದಿಯನ್ನು ಕಳುಹಿಸತಕ್ಕದ್ದು.

(೩) ಫಂಡಿಗೆ ವರ್ಗಣಿಕೊಡುವ ನೌಕರನಿಗೆ, ತಾನು ಇಚ್ಛಿಸಿದರೆ, ತನ್ನ ಖಾತೆಗೆ ಜಮಾ ಆದ ರಕಮಿನ ಯೋಗ್ಯಕಂಡಷ್ಟು ಭಾಗವನ್ನು ನ್ಯಾಶನಲ್ ಸೇವ್ಹಿಂಗ್ಸ್ ಬ್ಯಾಂಕ ಸರ್ಟಿಫಿಕೇಟುಗಳಲ್ಲಿ ರೂಪಾಂತರ ಮಾಡಿಸಿಕೊಳ್ಳಲು ಬರುವದು. ನೌಕರನಿಂದ ಅರ್ಜಿಯು ಬಂದನಂತರ, ಆತನು ನಮೂದ ಮಾಡಿದ ರಕಮಿನವರೆಗೆ ಸರಪಂಚನು ನ್ಯಾಶನಲ್ ಸೇವ್ಹಿಂಗ್ಸ ಬ್ಯಾಂಕಿನ ಸರ್ಟಿಫಿಕೇಟುಗಳನ್ನು ಕೊಂಡು ಕೊಳ್ಳುವನು. ಯಾವ ನೌಕರನ ಅಕೌಂಟಿನ ಮೇಲೆ ಅವು ಕೊಂಡು ಕೊಳ್ಳಲ್ಪಟ್ಟಿರುವವೋ, ಆತನ ವತಿಯಿಂದ ಆ ಸರ್ಟಿಫಿಕೇಟುಗಳು ಸರಪಂಚನ ಹೆಸರಿನಲ್ಲಿ ಮಾಡಲ್ಪಡುವವು. ಆದಾಗ್ಯೂ ಅವುಗಳ ತಾಬೆ ಮತ್ತು ಮೇಲ್ವಿಚಾರಣೆ ಹಾಗೂ ನೌಕರನ ವತಿಯಿಂದ ಅವುಗಳನ್ನು ವರ್ಗಾಯಿಸುವ ಅಥವಾ ವಿಲ್ಹೆವಾಟಮಾಡುವ ಅಧಿಕಾರ, ಸರಪಂಚನ ಕಡೆಗೆ ಉಳಿಯುವದು.

(೪) ಕಾನೂನು ೮. ಅನ್ವಯ ಇಟ್ಟ ಖಾತೆ ಅಕೌಂಟ ಮತ್ತು ಪ್ರತಿಯೊಬ್ಬ ನೌಕರನ ಪಾಸ ಬುಕ್ಕು ಇವುಗಳನ್ನು ಪ್ರತಿವರ್ಷದ ಫೇಬ್ರುವರಿ ತಿಂಗಳಿನ ಕಡೆಯ ವಾರದಕಿಂತಲೂ ಹೆಚ್ಚಿಗೆ ತಡವಾಗದಂತೆ ನೌಕರನಿಗೆ ತೋರಿಸುವದರಲ್ಲಿ ಬರುವದು. ಆತನಿಂದ ಪಾಸ ಬುಕ್ಕ ತೋರಿಸಿ

ದಂದಿನಿಂದ ಒಂದು ತಿಂಗಳದೊಳಗಾಗಿ ಅದು ಬರೋಬರಿ ಇದ್ದ ಬಗ್ಗೆ ಲೇಖೀ ದಾಖಲೆಯು ಕೊಡಲ್ಪಡಬೇಕು.

(೫) ನೌಕರನು ತನ್ನ ನೌಕರಿಯಿಂದ ಮುಕ್ತನಾಗುವ ಕಾಲಕ್ಕೆ ಅಥವಾ ಯಾವದಾದರೂ ನ್ಯಾಯವಾದಕಾರಣದ ಸಲುವಾಗಿ, ಆತನಿಗೆ ತನ್ನ ಎಲ್ಲ ರಕಮನ್ನು ತಿರುಗಿ ತೆಗೆದುಕೊಳ್ಳಲು ಪರವಾನಿಗೆಯನ್ನು ಕೊಟ್ಟ ಸಮಯದಲ್ಲಿ, ಆತನ ಸೇವ್ಹಿಂಗ್ಸ ಬ್ಯಾಂಕ ಅಕೌಂಟ ಬಂದ ಮಾಡಲ್ಪಡುವದ ರಲ್ಲಿ ಬರುವದು.

**೭. ಫಂಡಿನೊಳಗಿಂದ ಅಡವ್ಹಾನ್ಸ (ಸಾಲ) ಎಂದು ಕೊಡುವ ರಕಮು:—**

(೧) ಮೂರು ತಿಂಗಳದ ಪಗಾರದಕಿಂತಲೂ ಹೆಚ್ಚು ಆಗದಷ್ಟು ಅಥವಾ ಆತನ ಖಾತೆಗೆ ಜಮಾ ಇದ್ದ ಸ್ವತಃದ ವರ್ಗಣಿಯ ಅರ್ಧದಷ್ಟು —ಇವುಗಳಲ್ಲಿ ಕಡಿಮೆ ಆಗುವ ರಕಮು— ಫಂಡಿನಲ್ಲಿ ಆತನ ಖಾತೆಗೆ ಜಮಾ ಇದ್ದ ರಕಮಿನೊಳಗಿಂದ, ಆ ನೌಕರನಿಗೆ ಕೆಳಗೆ ನಮೂದ ಮಾಡಿದ ಕಾರಣಗಳ ಪೈಕಿ ಯಾವದೇ ಕಾರಣದ ಸಲುವಾಗಿ, ಪಂಚಾಯತಿಯ ಅನು ಮತಿಯಿಂದ ಕೊಡಬಹುದು.

(ಂ) ನೌಕರನ ಅಥವಾ ಆತನ ಕುಟುಂಬದಲ್ಲಿಯ ಯಾವದೇ ಜನ ಅಜಾರಿ ಸಂಬಂಧಿ ತಗಲಿದ ಖರ್ಚು ಪೂರೈಸುವದಕ್ಕೆ.

(ಬ) ತಮ್ಮ ಧರ್ಮರೂಢಿಯ ಪ್ರಕಾರ ನೌಕರನಿಗೆ ಯಾವದನ್ನು ಮಾಡುವದು ಅವಶ್ಯವಿರುವದೋ, ಅಂಥ ವಿವಾಹದ, ಸಮಾರಂಭದ ಅಥವಾ ಅಂತ್ಯ ಸಂಸ್ಕಾರದ ಸಂಬಂಧಿ ತಗಲಿದ ಖರ್ಚನ್ನು ಪೂರೈಸುವದಕ್ಕೆ ಆದರೆ ವರ್ಗಣಿದಾರನ ಖಾತೆಗೆ ಜಮಾ ಇದ್ದ ರಕಮು ೧೦೦ ರೂಪಾಯಿಗಳಿ ಗಿಂತಲೂ ಕಡಿಮೆ ಮಾಡಕೂಡದು.

(೭) (ಅ) ನೌಕರನಿಗೆ ಒಂದು ಸಾಲದ ರಕಮು ಮೊದಲೇ ಮಂಜೂರ ಮಾಡಲ್ಪಟ್ಟಿರುವ ಸಮಯದಲ್ಲಿ ಅನಂತರದ ಸಾಲದ ರಕಮು ಅಥವಾ ರಕಮುಗಳು ಸರಪಂಚರಿಂದ ಲೇಖೀಯಲ್ಲಿ ನೋಂದು ಮಾಡಲ್ಪಟ್ಟ ಬಲವತ್ತರವಾದ ಕಾರಣಗಳ ವ್ಯತಿರಿಕ್ತಾ ಮಂಜೂರ ಮಾಡುವದರಲ್ಲಿ ಬರ ಬಾರದು.

(ಬ) ಸಾಲದ ರಕಮು ಪೂರ್ಣ ರೂಪಾಯಿಗಳಲ್ಲಿ ವ್ಯಕ್ತ ಮಾಡಲ್ಪಟ್ಟಿದ್ದಿರಬೇಕು. ಪ್ರತಿಯೊಂದು ಕಂತು ಪೂರ್ಣ ರೂಪಾಯಿಯು ಗುಣಕವಾದದ್ದಿರತಕ್ಕದ್ದು. ಈ ಪ್ರಕಾರ ಸಾಲದ ಕಂತುಗಳನ್ನು ನಕ್ಕಿ ಗೊತ್ತು ಮಾಡುವದರ ಸಲುವಾಗಿ ಸಾಲದ ರಕಮನ್ನು ತಿದ್ದುವದರಲ್ಲಿ ಬರುವದು ಅಥವಾ ಅವಶ್ಯ ಕಂಡರೆ ಕಡಿಮೆ ಸಹ ಮಾಡುವದರಲ್ಲಿ ಬರುವದು.

(ಕ) ಎರಡು ಅಥವಾ ಹೆಚ್ಚು ರಕಮುಗಳನ್ನು ಸಾಲ ಕೊಟ್ಟಾಗ್ಗೆ ಪ್ರತಿಯೊಂದು ಸಾಲದ ರಕಮು ಪ್ರತ್ಯೇಕವಾಗಿ ಎಣಿಸಲ್ಪಡುವದು. ಬಡ್ಡಿ ಸಹಿತ ಪೂರ್ಣವಾಗಿ ತೀರುವವರೆಗೆ ಮತ್ತು ಅದು ಪ್ರತಿಯೊಂದು ರಕಮಿನ ಒಂದು ಇಪ್ಪತ್ತನಾಲ್ಕನೇ ಅಂಶಭಾಗದಕಿಂತಲೂ ಕಡಿಮೆ ಅಲ್ಲದಷ್ಟು ರಕಮು ತಿಂಗಳಾ ಮುರಿಯುವದರಲ್ಲಿ ಬರುವದು.

(ಡ) ಸಾಲದ ರಕಮುಗಳು. ಪಂಚಾಯತಿಯ ವಿವೇಚನೆ ಹನ್ನೆರಡರಕಿಂತ ಕಡಿಮೆ ಅಲ್ಲದಷ್ಟು ಮತ್ತು ಇಪ್ಪತ್ತನಾಲ್ಕಕ್ಕೆ ಮಿಕ್ಕದಷ್ಟು ಕಂತುಗಳಿಂದ ವಸೂಲ ಮಾಡುವದರಲ್ಲಿ ಬರುವವು. ಆದಾಗ್ಯೂ ನೌಕರನು ಇಚ್ಛಿಸಿದರೆ ಹನ್ನೆರಡರಕಿಂತ ಕಡಿಮೆ ಕಂತುಗಳಲ್ಲಿ ಅಥವಾ ಒಂದೇ ವೇಳೆಗೆ ಎರಡು ಅಥವಾ ಹೆಚ್ಚು ಹಪ್ತೆಗಳಿಂದ ರಕಮು ಪರತ ಮಾಡಲಿಕ್ಕೆ ಬರುವದು.

ಸಾಲದ ಮುದ್ದಲು ಸಂಪೂರ್ಣ ಸಲ್ಲಿಸಿದ ತರುವಾಯ ಸಾಲ ಸ್ವೀಕರಿಸಿದ ಅವಧಿ ಮತ್ತು ಅದು ಸಂಪೂರ್ಣ ತಿರುಗಿ ಮುಟ್ಟಿಸಿದ ಅವಧಿ, ಈ ಮಧ್ಯಂತರದ ಕಾಲದಲ್ಲಿ ಪ್ರತಿ ತಿಂಗಳಿಗೆ ಅಥವಾ ಅದರ ಭಾಗಕ್ಕೆ ದರ ತಿಂಗಳಿಗೆ ನೂರಕ್ಕೆ ಅಸಲಿನ ಒಂದು ಅಯ್ದಾಂಶ ದರದಂತೆ ಅದರ ಮೇಲಿನ ಬಡ್ಡಿಯು ಕೊಡಲ್ಪಡಬೇಕು.

(ಇ) ವಾಡಿಕೆಯ ವರ್ಗಣಿಯು ಹಣವನ್ನಲ್ಲದೆ ಅದರ ಕೂಡ ಸಾಲದ ಕಂತುಗಳನ್ನು ಸಹ ಪಗಾರದೊಳಗಿಂದ ಕಡ್ಡಾಯವಾಗಿ ಮುರಿದು ವಸೂಲ ಮಾಡಲ್ಪಡುವದರಲ್ಲಿ ಬರುವದು.

(ಗ) ಸಾಧಾರಣವಾಗಿ ಅಸಲಿನ ಹಣವು ಯಾವ ತಿಂಗಳದಲ್ಲಿ ಪೂರ್ಣವಾಗಿ ಸಲ್ಲುವದೋ ಆ ತಿಂಗಳದನಂತರ ಬರುವ ಮರು ತಿಂಗಳಿನಲ್ಲಿ ಬಡ್ಡಿಯನ್ನು ವಸೂಲ ಮಾಡುವದರಲ್ಲಿ ಬರುವದು. ಆದರೆ ಕ್ಲಾಜ (ಫ) ದಲ್ಲಿ ನಿರ್ದಿಷ್ಟ ಮಾಡಿದ ಅವಧಿಯು ೨೦ ತಿಂಗಳುಗಳಿಗಿಂತ ಹೆಚ್ಚಿಗೆ ಇದ್ದರೆ, ನೌಕರನು ಇಚ್ಛಿಸಿದರೆ ಬಡ್ಡಿಯನ್ನು ಎರಡು ಸಮವಾದ ಕಂತುಗಳಿಂದ ವಸೂಲ ಮಾಡಲು ಬರಬಹುದು.

ಬಡ್ಡಿಯು ರಕಮು ಪೂರ್ಣ ರೂಪಾಯಿಗಳಲ್ಲಿ ಕೊಡಲ್ಪಡಬೇಕು. ಒಂದು ಎರಡಾಂಶ ಅಥವಾ ಅದಕ್ಕೂ ಹೆಚ್ಚಿಗೆ ಆಗುವ ಭಾಗವನ್ನು ಮುಂದಿನ

ಹೆಚ್ಚಿನ ಪೂರ್ಣಾಂಕವನ್ನಿ ಹಿಡಿಯುವವರಲ್ಲಿ ಬರುವದು. ಮತ್ತು ಒಂದು ಎರಡಾಂಶಕ್ಕಿಂತ ಕಡಿಮೆ ಇರುವ ಭಾಗವನ್ನು ಬಿಟ್ಟು ಬಿಡುವದರಲ್ಲಿ ಬರುವದು.

(೮) ಪಂಚಾಯತಿಯು ಇಡತಕ್ಕ ರಜಿಸ್ಟರಗಳು :—

ಪಂಚಾಯತಿಯು ಮುಂದಿನ ರಜಿಸ್ಟರಗಳನ್ನು ಇಡಬೇಕು:—

(ಅ) ಫಂಡಿನ ಸಂಬಂಧದಲ್ಲಿ ಜಮಾ ಆದ ರಕಮು ಮತ್ತು ಖರ್ಚಿನ ರಕಮುಗಳನ್ನು ತೋರಿಸುವ ಒಂದು ಪ್ರಾವ್ಹಿಡೆಂಟ ಫಂಡ ದಿನವಹಿ.

(ಬ) ನೌಕರನ ವರ್ಗಣಿ, ಮತ್ತು ಕಾಲಕಾಲಕ್ಕೆ ಅದರಲ್ಲಿ ಭರಪಾಯಿ ಹಾಕಿದ ಪಂಚಾಯತಿಯ ಕಾಂಟ್ರಿಬ್ಯೂಶನ್ಸ ಇವುಗಳನ್ನು ಸ್ವತಂತ್ರವಾಗಿ ತೋರಿಸುವ ಖಾತೆ ಆಕೌಂಟ ಬುಕ್ಕು.

(ಕ) ಪ್ರತಿಯೊಬ್ಬ ನೌಕರನ ಪತಿಯಿಂದ ಕೊಟ್ಟ ರಕಮಿನ ತಪಶೀಲ ತೋರಿಸುವ ಅಧಿಕೃತ ತಕ್ತೆಗಳು; ಮತ್ತು

(ಡ) ಸಾಲದ ರಕಮುಗಳು ಮತ್ತು ವಸೂಲಾದ ರಕಮುಗಳನ್ನು ತೋರಿಸುವ ಒಂದು ಅಡವ್ಹಾನ್ಸ ರಜಿಸ್ಟರು

ಪ್ರಾವ್ಹಿಡಂಟ ಫಂಡ ಖಾತ ಈ ನಮೂನೆಯು 'ಅ' ದಲ್ಲಿ ಇರಲಿಕ್ಕೆ ಬೇಕು.

**೯. ಪಂಚಾಯತಿಯ ಕಾಂಟ್ರಿಬ್ಯೂಶನ್‌ದ ಪಾತ್ರತೆಯ ಬಗ್ಗೆ ನೌಕರಿಯ ಮರ್ಯಾದೆ:—**

(೧) ಯಾವ ವರ್ಗಣಿದಾರನು ಪಂಚಾಯತಿಯ ನೌಕರಿಯಲ್ಲಿ ಐದು ವರ್ಷದಕಿಂತಲೂ ಹೆಚ್ಚಿಗೆ ಕಾಲ ಇರುವನೋ ಅವನು, ನೌಕರಿಯಿಂದ ಮುಕ್ತನಾದ ಮೇಲೆ ಪಂಚಾಯತಿಯ ಬಡ್ಡಿ ಸಹಿತವಾದ ಕಾಂಟ್ರಿಬ್ಯೂಶನಕ್ಕೆ ಹಕ್ಕದಾರನಾಗುವನು.

ಸದರಹು ಅವಧಿಯನ್ನು ವರ್ಗಣಿದಾರನ ನೌಕರಿಯ ಪ್ರಾರಂಭದಿಂದ ಎಣಿಸುವವರಲ್ಲಿ ಬರುವದು ಮತ್ತು ಅದರೊಳಗಿಂದ ಬಿನ್ ಪಗಾರಿ ರಜೆಯ ಅವಧಿಯನ್ನು ವಜಾ ಮಾಡುವದರಲ್ಲಿ ಬರುವದು.

ಆದರೆ ಯಾವ ವರ್ಗಣಿದಾರನು ಪಂಚಾಯತಿಯ ನೌಕರಿಯಲ್ಲಿ

ಇದ್ದಾಗ್ಯೆ ಮೃತ್ಯು ಹೊಂದುವನೋ ಆತನು, ಆತನ ನೌಕರಿಯು ಅವಧಿಯು ಎಷ್ಟೇ ಆಗಿದ್ದರೂ ಸಹ, ಪಂಚಾಯತಿಯ ಕಾಂಟ್ರಿಬ್ಯೂಶನಕ್ಕೆ ಹಕ್ಕುದಾರ ನಾದನೆಂದು ತಿಳಿಯುವದರಲ್ಲಿ ಬರುವದು.

(೨) ನೌಕರಿಯು ಐದು ವರ್ಷ ಪೂರ್ಣವಾಗುವ ಪೂರ್ವದಲ್ಲಿಯೇ ನೌಕರನಿಗೆ ಒಂದು ವೇಳೆ ಮುಕ್ತ ಮಾಡಲ್ಪಟ್ಟರೆ, ಆತನಿಗೆ ತನ್ನ ಸ್ವತಃದ ವರ್ಗಣಿಯ ರಕಮು ಮತ್ತು ಅದರ ಮೇಲಿನ ಬಡ್ಡಿ ಇಷ್ಟೇ ಸಿಗಬಹುದು. ಪಂಚಾಯತಿಯ ಕಾಂಟ್ರಿಬ್ಯೂಶನ್ ಮತ್ತು ಅದರ ಮೇಲಿನ ಬಡ್ಡಿ ಪಂಚಾ ಯತಿ ಫಂಡಿಗೆ ಜಮಾ ಆಗಬಹುದು.

ಆದರೆ ಮುಕ್ತತೆಯು, ಮುಂದಿನ ನೌಕರಿಯ ಸಲುವಾಗಿ ದಾಖಲೆ ಯಿಂದ ನಿರ್ಣಯಿಸಲ್ಪಟ್ಟ ಅಸಮರ್ಥತೆಯಿಂದ ಉಂಟಾದಾಗ್ಯೆ ಅಥವಾ ವರ್ಗಣಿದಾರನ ಆಟೋಪಿನ ಹೊರಗೆ ಇರುವ ಬೇರೆ ಕಾರಣಗಳ ಮೂಲಕ ನೌಕರಿಯಿಂದ ಮುಕ್ತ ಹೊಂದುವದು ಅಪರಿಹಾರ್ಯವಾಗಿದ್ದರೆ ಪಂಚಾ ಯತಿಯು ಆ ವರ್ಗಣಿದಾರನಿಗೆ ಕಾಂಟ್ರಿಬ್ಯೂಶನ್ ಹಣವನ್ನು ಕೊಡ ಬಹುದು..

**ಸ್ಪಷ್ಟೀಕರಣ:—** ಈ ಕಾನೂನಿನಲ್ಲಿ ಉಪಯೋಗಿಸಲ್ಪಟ್ಟ "ನೌಕರಿ ಯಿಂದ ಮುಕ್ತತೆ" ಈ ಶಬ್ದದಲ್ಲಿ, ರಾಜೀನಾಮೆಯನ್ನು ಕೊಟ್ಟು, ನೌಕರಿ ಯನ್ನು ಬಿಡುವದು, ತೆಗೆದು ಹಾಕುವದು ಅಥವಾ ಬಡತರ್ಫ ಮಾಡುವದು. ಇವುಗಳ ಸಮಾವೇಶವಾಗುತ್ತದೆ.

**೧೦. ನೌಕರನ ಪಂಚಾಯತಿಯ ಕಾಂಟ್ರಿಬ್ಯೂಶನ್ ಮೇಲಿನ ಹಕ್ಕು ನಷ್ಟವಾಗೋಣ:—**

ಒಂದು ವೇಳೆ, ಒಬ್ಬ ನೌಕರನು, ಗೈರ ವರ್ತಣೂಕಿಯ ಬಗ್ಗೆ ತೆಗೆದು ಹಾಕಲ್ಪಟ್ಟಿದ್ದರೆ. ಪಂಚಾಯತಿಯ ಕಾಂಟ್ರಿಬ್ಯೂಶನ್ ಮತ್ತು ಅದರ ಮೇಲಿನ ಬಡ್ಡಿ, ಇವುಗಳ ಮೇಲಿನ ಆತನ ಹಕ್ಕು ನಷ್ಟವಾಗಬಹುದು. ಆದರೆ, ಆ ಗೈರ ವರ್ತಣೂಕಿಯು ಫೌಜದಾರಿ ಸ್ವರೂಪದ್ದು ಇಲ್ಲದ ಪಕ್ಷದಲ್ಲಿ, ಆ ಪಂಚಾಯತಿಗೆ ಯೋಗ್ಯ ಕಂಡಷ್ಟು ರಕಮನ್ನು, ಗೈರ ವರ್ತಣೂಕಿಯ ಬಗ್ಗೆ ತೆಗೆದು ಹಾಕಲ್ಪಟ್ಟ ವರ್ಗಣಿದಾರನಿಗೆ, ಕೊಡಲಿಕ್ಕೆ ಬರುವದು.

### ೧೧. ರಕಮನ್ನು ಸ್ವೀಕರಿಸುವ ವಾರಸದಾರನ ನಾಮಿನೇಶನ್:–

ಪ್ರತಿಯೊಬ್ಬ ವರ್ಗಣಿದಾರನು ಪ್ರಾವ್ಹಿಡಂಟ ಫಂಡನ್ನು ತುಂಬುವದು ಪ್ರಾರಂಭಿಸಿದ ಕಾಲಕ್ಕೆ ಅಥವಾ ಪ್ರಾರಂಭಿಸಿದ 'ಬ' ನಮೂನೆಯಲ್ಲಿ ಒಂದು ಹೇಳಿಕೆಯನ್ನು ಶಕ್ಯವಿದ್ದಷ್ಟು ಬೇಗನೆ ನಮೂನೆ 'ಕ' ಅಥವಾ 'ಡ' ದಲ್ಲಿ ತನ್ನ ಉಪಯುಕ್ತತೆಯ ಪ್ರಕಾರ ಸರಪಂಚನ ಕಡೆಗೆ ಒಂದು ನಾಮಿನೇಶನ್ ಹಾಜರ ಪಡಿಸತಕ್ಕದ್ದು. ಇಂಥ ಯಾವದೇ ಅಥವಾ ಅನಂತರದ ನಾಮಿನೇಶನ್ ಮುಂದೆ ಯಾವದೇ ಕಾಲಕ್ಕೆ ರದ್ದು ಮಾಡಿಸಿಕೊಳ್ಳಲಿಕ್ಕೆ ಬರಬಹುದು. ಆದರೆ ಹೊಸ ನಾಮಿನೇಶನ್ ಸರಪಂಚನಿಗೆ ಮುಟ್ಟಿದ ತಾರೀಖಿನಿಂದ ಅಮಲಿನಲ್ಲಿ ಬರಬಹುದು. ವರ್ಗಣಿದಾರನ ವಿವಾಹದ ನಂತರ ಅಥವಾ ಪುನರ್ವಿವಾಹದ ನಂತರ, ಮೊದಲು ಮಾಡಿದ ನಾಮಿನೇಶನ್ ನಿರುಪಯುಕ್ತ ಆಗುವದು. ಮತ್ತು ನಾಮಿನೇಶನ್ ಹಾಜರ ಪಡಿಸಲ್ಪಟ್ಟ ವಿನಹ ವರ್ಗಣಿದಾರನ ಖಾತೆಗೆ ಜಮಾ ಇದ್ದ ರಕಮಿನ ವಿಲ್ಹೇವಾಟ ಜರೂರ ಕಂಡರೆ, ಕಾನೂನು ೧೩ (೧)(೨) ಅನ್ವಯ ಮಾಡುವದರಲ್ಲಿ ಬಳುವದು.

### ೧೨. ಕುಟುಂಬ ವ್ಯತಿರಿಕ್ತ ಎರಡನೆ ಯಾವದೇ ಇಸಮಿನ ಹೆಸರಿನಲ್ಲಿ ನಾಮಿನೇಶನ್ ಮಾಡಲಿಕ್ಕೆ ಪ್ರತಿಬಂಧ:–

ಕುಟುಂಬ ಇರುವ ವರ್ಗಣಿದಾರನಿಗೆ ತನ್ನ ಕುಟುಂಬದ ಹೊರಗಿನ ಯಾವದೇ ಇಸಮಿನ ಹೆಸರಿನಿಂದ ನಾಮಿನೇಶನ್ ಮಾಡಲಿಕ್ಕೆ ಬರಲಾರದು. ತನ್ನ ಕುಟುಂಬದಲ್ಲಿಯ ಇಸಮುಗಳಲ್ಲಿ, ಯಾವದೇ ಒಂದು ಅಥವಾ ಹೆಚ್ಚಿ ಇಸಮುಗಳ ಹೆಸರಿನಲ್ಲಿ ಉಳಿದವರನ್ನು ಜೋಡಿಸಿ ಪಡಿಸಿ ಆತನಿಗೆ ನಾಮಿನೇಶನ್ ಮಾಡಲು ಬರಬಹುದು.

### ೧೩. ಫಂಡಿನಲ್ಲಿ ಅಂತ್ಯದಲ್ಲಿ ಕೂಡಿಬಿದ್ದ ರಕಮುಗಳು:–

ನೌಕರದಾರನು ನೌಕರಿಯನ್ನು ಬಿಡುವ ಪೂರ್ವದಲ್ಲಿ ಮರಣ ಹೊಂದಿದರೆ, ಆತನ ಫಂಡಿನಲ್ಲಿ ಕೂಡಿಟ್ಟ ರಕಮು, ಮುಂದೆ ಹೇಳಿದ ಪ್ರಕಾರ ವಿಲ್ಹೇವಾಟ ಮಾಡುವದರಲ್ಲಿ ಬರುವದು.

(೧) ನೌಕರನು ತನ್ನ ಹಿಂದೆ ಕುಟುಂಬವನ್ನು ಬಿಟ್ಟು ಮರಣ ಹೊಂದಿದಾಗ್ಯೆ:—

(೧) ಕಾನೂನು ೧೧ರಲ್ಲಿ ನಮೂದಿಸಿದ ನಿಯಮಗಳಿಗನುಸಾರವಾಗಿ, ತನ್ನ ಕುಟುಂಬದಲ್ಲಿಯ ಒಂದು ಅಥವಾ ಅನೇಕ ಇಸಮುಗಳ ಹೆಸರಿನಲ್ಲಿ ಅಥವಾ ಆತನ ಮೇಲೆ ಅವಲಂಬಿಸಿ ಇರುವ ಎರಡನೇ ಇಸಮಿನ ಹೆಸರಿನಲ್ಲಿ ನೌಕರನಿಂದ ನಾಮಿನೇಶನ್ ಮಾಡಲ್ಪಟ್ಟದ್ದಿದ್ದರೆ ಫಂಡಿನಲ್ಲಿ ಆತನ ಖಾತೆಗೆ ಜಮಾ ಇದ್ದ ರಕಮು, ಅಥವಾ ನಾಮಿನೇಶನ್ ಸಂಬಂಧ ಇರುವ ಅದರಭಾಗವು, ಆತನಿಂದ ನಾಮಿನೇಟ ಮಾಡಿದ ಇಸಮು ಅಥವಾ ಇಸಮುಗಳಿಗೆ ನಾಮಿನೇಶನದಲ್ಲಿ ನಮೂದ ಮಾಡಲ್ಪಟ್ಟ ಪ್ರಮಾಣದಲ್ಲಿ ಸಲ್ಲತಕ್ಕದ್ದಾಗುವದು.

(೨) ಒಂದು ವೇಳೆ ನೌಕರನ ಕುಟುಂಬದಲ್ಲಿಯ ಯಾವದೇ ಇಸಮಿನ ಅಥವಾ ಇಸಮುಗಳ ಹೆಸರಿನಲ್ಲಿ ಅಥವಾ ಆತನ ಮೇಲೆ ಅವಲಂಬಿಸಿ ಇರುವ ಇಸಮಿನ ಹೆಸರಿನಲ್ಲಿ ನಾಮಿನೇಶನ್ ಮಾಡಲ್ಪಟ್ಟದ್ದು ಇಲ್ಲದ ಪಕ್ಷದಲ್ಲಿ ಅಥವಾ ಫಂಡಿನಲ್ಲಿ ಆತನ ಖಾತೆಗೆ ಜಮಾ ಇದ್ದ ರಕಮಿನ ಒಂದು ಭಾಗಕ್ಕೆ ಮಾತ್ರ ಸಂಬಂಧಿಸಿದ್ದರೆ ಪೂರ್ಣ ರಕಮು ಅಥವಾ ನಾಮಿನೇಶನ್ ಸಂಬಂಧ ಇಲ್ಲದ ಅದರ ಭಾಗವು ಸಂಗತಿಯು ಇದ್ದಹಾಗೆ, ಆತನ ಕುಟುಂಬದಲ್ಲಿಯ ಇಸಮು ಅಥವಾ ಇಸಮುಗಳ ಅಥವಾ ಆತನ ಮೇಲೆ ಅವಲಂಬಿಸಿ ಇರುವ ಎರಡನೇ ಇಸಮನ್ನು ಬಿಟ್ಟು, ಯಾವದೇ ವ್ಯಕ್ತಿಯು ಅಥವಾ ವ್ಯಕ್ತಿಗಳ ಹೆಸರಿನಲ್ಲಿ ನಾಮಿನೇಶನ್ ವಿದ್ದ ಅಭಿಪ್ರಾಯವಿದ್ದಾಗ್ಯೂ ಆತನ ಕುಟುಂಬದ ಇಸಮುಗಳಿಗೆ ಸರಿಯಾದ ಹಿಶೆಗಳಲ್ಲಿ ಸಲ್ಲತಕ್ಕದ್ದಾಗುವದು. ಆದರೆ (ಅ) (ಬ) (ಕ) ಮತ್ತು (ಡ) ಗಳಲ್ಲಿ ನಮೂದ ಮಾಡಿದ ವ್ಯಕ್ತಿಗಳನ್ನು ಹೊರ್ತುಪಡಿಸಿ ಕುಟುಂಬದಲ್ಲಿ ಯಾವದೇ ಇಸಮು ಹಯಾತ ಇದ್ದರೆ, ರಕಮಿನ ಯಾವ ಭಾಗವನ್ನೂ ಕೆಳಗೆ ಕಾಣಿಸಿದ ಕ್ಲಾಜುಗಳಲ್ಲಿ ನಮೂದ ಮಾಡಿದ ವ್ಯಕ್ತಿಗಳಿಗೆ ಕೊಡಲಿಕ್ಕೆ ಬರಲಾರದು.

(ಅ) ಕಾಯದೇಶೀರ ವಯಸ್ಸಿಗೆ ಬಂದ ಗಂಡು ಮಕ್ಕಳು

(ಬ) ಕಾಯದೇಶೀರ ವಯಸ್ಸಿಗೆ ಬಂದ ಮಯತ ಮಗನ ಗಂಡು ಮಕ್ಕಳು

(ಕ) ಪತಿ ಹಯಾತ ಇರುವಂಥ ವಿವಾಹಿತ ಹೆಣ್ಣು ಮಕ್ಕಳು ಅಥವಾ

(ಡ) ಪತಿ ಹಯಾತ ಇರುವಂಥ ಮಯತ ಮಗನ ವಿವಾಹಿತ ಹೆಣ್ಣು ಮಕ್ಕಳು.

ಮತ್ತು ಮಯತ ಮಗನ ವಿಧವಾ ಹೆಂಡತಿ ಅಥವಾ ಹೆಂಡಂದಿರಿಗೆ ಮತ್ತು ಮಗ ಅಥವಾ ಮಕ್ಕಳಿಗೆ, ಒಂದು ವೇಳೆ ಆತನು ನೌಕರನ ಹಿಂದೆ ಜೀವದಿಂದ ಉಳಿದಿದ್ದರೆ ಮತ್ತು ಆತನ ಮರಣ ಸಮಯಕ್ಕೆ ಕಾಯಿದೆಯಿಂದ ವಯಸ್ಸಿಗೆ ಬಾರದೆ ಇದ್ದ ಪಕ್ಷದಲ್ಲಿ ಆತನಿಗೆ ಸಿಕ್ಕಬಹುದಾಗಿದ್ದ ಭಾಗವು ಮಾತ್ರ, ಸಮಾನವಾದ ಭಾಗಗಳಲ್ಲಿ ಸಿಗಬಹುದು.

**೨. ನೌಕರದಾರನ ಪಶ್ಚಾತ್ ಆತನ ಕುಟುಂಬದವರು ಯಾರೂ ಇಲ್ಲದಾಗ:—**

(ಅ) ಕಾನೂನು ೧೧ನೇ ದ್ದರ ಪ್ರಕಾರ, ಯಾವದೇ ವ್ಯಕ್ತಿಯ ಅಥವಾ ವ್ಯಕ್ತಿಗಳ ಹೆಸರಿನಲ್ಲಿ ಆತನಿಂದ ಮಾಡಲ್ಪಟ್ಟ ನಾಮಿನೇಶನ್ ಇದ್ದರೆ, ಫಂಡಿನಲ್ಲಿ ಆತನ ಖಾತೇಕ್ಕೆ ಜಮಾ ಇದ್ದ ರಕಮು. ಅಥವಾ ನಾಮಿನೇಶನ್ ಸಂಬಂಧವಿದ್ದ ಅದರ ಭಾಗವು, ನಾಮಿನೇಶನ್‌ದಲ್ಲಿ ನಮೂದ ಮಾಡಿದ ಪ್ರಮಾಣದಲ್ಲಿ ಆತನು ನಾಮಿನೇಟ ಮಾಡಿದ ಇಸಮಿಗೆ ಅಥವಾ ಇಸಮುಗಳಿಗೆ ಸಲ್ಲತಕ್ಕದ್ದಾಗುವದು.

(ಬ) ಆತನ ಖಾತೇಕ್ಕೆ ಜಮಾ ಇದ್ದ ಪೂರ್ಣ ರಕಮಿನ ಸಂಬಂಧವಾಗಿ ಅಥವಾ ಅದರ ಭಾಗದ ಸಂಬಂಧವಾಗಿ, ಕಾನೂನು ೧೧ನೇ ದ್ದರ ಪ್ರಕಾರ, ಯಾವದೇ ಇಸಮಿನ ಅಥವಾ ಇಸಮುಗಳ ಹೆಸರಿನಲ್ಲಿ ನಾಮಿನೇಶನ್ ಇಲ್ಲದ ಪಕ್ಷದಲ್ಲಿ, ಇಂಥ ಪೂರ್ಣ ರಕಮು ಅಥವಾ ಅದರ ಭಾಗವು ಆತನ ತಾಯಿ ತಂದೆಗಳಿಗೆ ಸಮಾನವಾದ ಭಾಗಗಳಲ್ಲಿ ಕೊಡಲ್ಪಡತಕ್ಕದ್ದಾಗುವದು, ಅಥವಾ ಹಯಾತ ಇರುವ ತಾಯಿ ಅಥವಾ ತಂದೆಗೆ ಪೂರ್ಣ ಕೊಡುವದರಲ್ಲಿ ಬರುವದು.

(ಕ) ನೌಕರದಾರನ ಪಶ್ಚಾತ್ ಕುಟುಂಬದಲ್ಲಿಯ ಯಾವ ಇಸಮೂ ಇಲ್ಲದಾಗ್ಗೆ, ಮತ್ತು ಕಾನೂನು ೧೧ನೇ ಪ್ರಕಾರ ಆತನಿಂದ ಮಾಡಲ್ಪಟ್ಟ ನಾಮಿನೇಶನ್ ಇಲ್ಲದ ಪಕ್ಷದಲ್ಲಿ ಅಥವಾ ನಾಮಿನೇಶನ್, ಆತನ ಫಂಡಿನಲ್ಲಿಯ ರಕಮಿನ ಒಂದು ಭಾಗಕ್ಕೆ ಮಾತ್ರ ಸಂಬಂಧಿಸಿದ್ದರೆ ಕ್ಲಾಜ (ಡ) ಮತ್ತು ೧೯೩೫ನೇ ಇಸ್ವಿಯ ಪ್ರಾವ್ಹಿಡಂಟ ಫಂಡ ಆಕ್ಟಿನ ಕಲಮು (೪) ಪೋಟಕಲಮು (೧) ನೇದ್ದರ ಕ್ಲಾಜ (ಕ) ಇವರ ಪೋಟ ಕ್ಲಾಜ

(೨) ರಲ್ಲಿಯ ಸಮಂಜಸವಾದ ಗೊತ್ತುವಳಿಗಳು, ನಾಮಿನೇಶನಕ್ಕೆ ಸಂಬಂಧ ಇಲ್ಲದೆ ಇದ್ದ ಪೂರ್ಣರಕಮಿಗೆ ಅಥವಾ ಅದರ ಭಾಗಕ್ಕೆ ಲಾಗೂ ಆಗುವವು. ಆದರೆ ಇಂಥ ಪೂರ್ಣರಕಮು ಅಥವಾ ಅದರ ಭಾಗವು ಕಾನೂನು ೧೩ (೨) (ಬ) ಅನ್ವಯ ಕೊಡಲು ಬರುವದಿಲ್ಲ.

**(೧೪) ವರ್ಗಣಿದಾರನ ಹೆಸರಿನಲ್ಲಿ ಜಮಾ ಇದ್ದ ರಕಮಿನೊಳಗಿಂದ ಪಂಚಾಯತಿಗೆ ಸಲ್ಲತಕ್ಕ ರಕಮಿನ ವಸೂಲಿ :—**

ನೌಕರನ ಹೆಸರಿನಲ್ಲಿ ಜಮಾ ಇದ್ದ ರಕಮು ಆತನಿಗೆ ಕೊಡಲ್ಪಡಬಹುದಾಗ್ಗೆ, ಆತನಿಂದ ಪಂಚಾಯತಿಗೆ ಸಲ್ಲತಕ್ಕ ರಕಮನ್ನು ಸರಪಂಚನು ಅದರೊಳಗಿಂದ ಮುರಿದುಕೊಳ್ಳಬಹುದು. ಆದರೆ ಪಂಚಾಯತಿಯು ಬಡ್ಡಿ ಸಹಿತ ಕೊಡತಕ್ಕ ಕಾಂಟ್ರಿಬ್ಯೂಶನ್ ಹಣದಕಿಂತ ನೌಕರದಾರನ ಹೆಸರಿನಲ್ಲಿ ಜಮಾ ಇದ್ದ ರಕಮು ಕಡಿಮೆ ಆಗುತ್ತಿದ್ದರೆ ಇಂಥ ಕಡಿತವು ಮಾಡಲ್ಪಡತಕ್ಕದ್ದಲ್ಲ.

# ನಮೂನೆ

## ಪ್ರಾವ್ಹಿಡೆಂಟ ಫಂಡ

( ಕಾನೂನು ೮

ಹೆಸರು ನಂಬರ

ಹಿಂದಿನ ಬಡ್ಡಿಯು
ವರ್ಷದ ಪಂಚಾಯು- ತೆಗೆದು ರಕಮು ಆಕರಿಸ-
೩೧ ಮಾರ್ಚಕ್ಕೆ ತಿಯ ಕೊಂಡ ತೆಗೆಯುವದು ಲ್ಪಡುವ ಶರಾ
ಇದ್ದ ಕಾಂಟ್ರಿ ರಕಮಿನ ಒಟ್ಟು ತಿಂಗಳದ
ಪಗಾರ ಬ್ಯೂಶನ್ ಪರತ ವ್ಹೊವಚರ ಶಿಲ್ಕು.
೧೯ - ೧೯ ಭರಪಾಯಿ ನಂ. ವ ರಕಂ
ವರ್ಗಣಿ ತಾರೀಖು

೧ ೨ ೩ ೪ ೫ ೬ ೭ ೮

ಎಪ್ರಿಲ್
ಮೇ
ಜೂನ
ಜುಲೈ
ಆಗಸ್ಟ
ಸಪ್ಟೆಂಬರ
ಆಕ್ಟೋಬರ
ನೋವ್ಹೆಂಬರ
ಡಿಶಂಬರ
ಜಾನೇವಾರಿ
ಫೇಬ್ರುವರಿ
ಮಾರ್ಚ

ಒಟ್ಟು ರೂಪಾಯಿ

ಸನ್ ೧೯ – ರಿಂದ ಸನ್ ೧೯ – ವರೆಗಿನ ಶಿಲ್ಕು

ಮೇಲೆ ತೋರಿಸಿದ ಪ್ರಕಾರ ತುಂಬಿದ ಮತ್ತು ತೆಗೆದುಕೊಂಡ ರಕಮುಗಳು

ಸನ್ ೧೯ – ರಿಂದ ಸನ್ ೧೯ – ವರೆಗಿನ ಬಡ್ಡಿ

ಒಟ್ಟು ರಕಮು

ವಜಾ ಮಾಡಿರಿ:— ಮೇಲೆ ಕಾಣಿಸಿದಂತೆ ತೆಗೆದುಕೊಂಡ ರಕಮುಗಳು

ಸನ್ ೧೯ ರ ಮಾರ್ಚ ೩೧ ಕ್ಕೆ ಶಿಲ್ಕು

ನೋಂದ ಮಾಡಿದವನು :-

ಚೆಕ್ ಮಾಡಿದವನು :—

ಅ

ಲೇಜರ

ನೋಡು )

ಆಫೀಸಿಯಲ್ ಹುದ್ದೆ                                                    ಜಿಲ್ಲಾ

| ಹಿಂದಿನ ವರ್ಷದ ೩೧ ಮಾರ್ಚಕ್ಕೆ ಇದ್ದ ಪಗಾರ ೧೯ - ೧೯ | ವರ್ಗಣಿ ಪಂಚಾಯತಿಯ ಕಾಂಟ್ರಿಬ್ಯೂಶನ್ | ತೆಗೆದು ಕೊಂಡ ಪರತೆ ಭರಪಾಯಿ | ತೆಗೆಯುವದು | ರಕಮು ರಕಮಿನ ಒಟ್ಟು | ತಿಂಗಳದ ವ್ಹೋವಚರ ಸಂ ವ ರಕಂ ತಾರೀಖು | ಬಡ್ಡಿಯು ಆಕರಿಸಲ್ಪಡುವ ಶಿಲ್ಕು. | ಶರಾ |
|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ |
| ಎಪ್ರಿಲ್ | | | | | | | |
| ಮೇ | | | | | | | |
| ಜೂನ | | | | | | | |
| ಜುಲೈ | | | | | | | |
| ಆಗಷ್ಟ | | | | | | | |
| ಸಪ್ಟೆಂಬರ | | | | | | | |
| ಆಕ್ಟೋಬರ | | | | | | | |
| ನೋವ್ಹೆಂಬರ | | | | | | | |
| ಡಿಶಂಬರ | | | | | | | |
| ಜಾನೇವಾರಿ | | | | | | | |
| ಫೇಬ್ರುವರಿ | | | | | | | |
| ಮಾರ್ಚ | | | | | | | |
| ಒಟ್ಟು ರೂಪಾಯಿ | | | | | | | |

ಸನ್ ೧೯ – ರಿಂದ ಸನ್ ೧೯ – ವರೆಗಿನ ಶಿಲ್ಕು

ಮೇಲೆ ತೋರಿಸಿದ ಪ್ರಕಾರ ತುಂಬಿದ ಮತ್ತು ತೆಗೆದುಕೊಂಡ ರಕಮುಗಳು

ಸನ್ ೧೯ – ರಿಂದ ಸನ್ ೧೯ – ವರೆಗಿನ ಬಡ್ಡಿ

ಒಟ್ಟು ರಕಮು ————

ವಜಾ ಮಾಡಿರಿ:— ಮೇಲೆ ಕಾಣಿಸಿದಂತೆ ತೆಗೆದುಕೊಂಡ ರಕಮುಗಳು

ಸನ್ ೧೯ ರ ಮಾರ್ಚ ೩೧ ಕ್ಕೆ ಶಿಲ್ಕು

ನೋಂದ ಮಾಡಿದವನು :—

ಚೆಕ್ ಮಾಡಿದವನು :—

# ನಮೂನೆ ಬ

( ಕಾನೂನು ೧೧ ನೋಡು )

ಫಂಡಿಗೆ ಪ್ರವೇಶ ದೊರಕಿದ ನಂತರ ಪ್ರತಿಯೊಬ್ಬ ವರ್ಗಣಿದಾರನಿಂದ ತುಂಬತಕ್ಕ ಮುಂಬಯಿ ಗ್ರಾಮ ಪಂಚಾಯತಿ ಪ್ರಾವ್ಹಿಡೆಂಟ ಫಂಡ ಕಾನೂನುಗಳಲ್ಲಿ ನಮೂದ ಮಾಡಿದ ನಿಯಮಗಳಿಗನುಸಾರವಾಗಿ ನಡೆದು ಕೊಳ್ಳಲಿಕ್ಕೆ ಈ ಮೂಲಕ ನಾನು ಸಮ್ಮತಿಸುತ್ತೇನೆ.

**ನೌಕರನ ಹೆಸರು :—**

**ಗ್ರಾಮ ಪಂಚಾಯತಿಯ ಹೆಸರು: —**

**ಗ್ರಾಮ ಮತ್ತು ಜಿಲ್ಲೆಯ ಹೆಸರು :—**

ನೌಕರನ ಸಹಿ

# ನಮೂನೆ ಕ

( ಕಾನೂನು ೧೧ ನೋಡು )

**ನೌಕರನಿಗೆ ಕುಟುಂಬ ಇದ್ದಾಗ ಮಾಡುವ ನಾಮಿನೇಶನದ ನಮೂನೆ:—**

ನಾನು ಈ ಮೂಲಕ ತಿಳಿಸುವದೇನಂದರೆ, ನನ್ನ ಮರಣ ಸಮಯದಲ್ಲಿ ಗ್ರಾಮ ಪಂಚಾಯತಿ ಫಂಡಿನಲ್ಲಿ ನನ್ನ ಖಾತೆಗೆ ಜಮಾ ಇದ್ದ ರಕಮು, ಕೆಳಗೆ ಕಾಣಿಸಿದ ವ್ಯಕ್ತಿ ಅಥವಾ ವ್ಯಕ್ತಿಗಳೊಳಗೆ ಅವರ ಹೆಸರುಗಳ ಎದುರಿಗೆ ನಮೂದಿಸಿದ ರೀತಿಯಲ್ಲಿ ಹಂಚಲ್ಪಡಬೇಕು.

| ನಾಮಿನಿ ಅಥವಾ ನಾಮಿನಿಗಳ ಹೆಸರು ವ ಪತ್ತೆ | ನೌಕರನ ಕೂಡ ಇದ್ದ ಸಂಬಂಧ | ಸಜ್ಞಾನ ಅಥವಾ ಅಜ್ಞಾನ ಅಜ್ಞಾನ ಇದ್ದರೆ ಆತನ ಅಥವಾ ಅವಳ ವಯಸ್ಸು | ಠೇವಿನ ಹಿಸೆಗಳ ರಕಮು |
|---|---|---|---|
| ೧ | ೨ | ೩ | ೪ |

ಸ್ಥಳ :— ನೌಕರನ ಸಹಿ

ತಾರೀಖು :— ಸಹಿಗೆ ಎರಡು ಸಾಕ್ಷಿ

# ನಮೂನೆ ಡ

( ಕಾನೂನು ೧೧ ನೋಡು )

**ನೌಕರನಿಗೆ ಕುಟುಂಬ ಇಲ್ಲದಾಗ ಮಾಡುವ ನಾಮಿನೇಶನದ ನಮೂನೆ:—**

ನಾನು ಈ ಮೂಲಕ ಜಾಹೀರ ಪಡಿಸುವದೇನಂದರೆ:—

ನನಗೆ ಕುಟುಂಬವಿರುವದಿಲ್ಲ ಮತ್ತು ಸೂಚಿಸುವದೇನಂದರೆ, ನನ್ನ ಮರಣ ಸಮಯದಲ್ಲಿ, ಗ್ರಾಮ ಪಂಚಾಯತ ಪ್ರಾವ್ಹಿಡೆಂಟ ಫಂಡಿನಲ್ಲಿ ನನ್ನ ಖಾತೇಕ್ಕೆ ಜಮಾ ಇದ್ದ ರಕಮು, ನನ್ನ ಕುಟುಂಬ ಇಲ್ಲದ ಪ್ರಸಂಗದಲ್ಲಿ, ಕೆಳಗೆ ಕಾಣಿಸಿದ ವ್ಯಕ್ತಿಗಳೊಳಗೆ ಅವರ ಹೆಸರುಗಳ ಎದುರಿಗೆ ನಮೂದಿಸಿದ ರೀತಿಯಲ್ಲಿ ಹಂಚಲ್ಪಡಬೇಕು :—

| ನಾಮಿನಿ ಅಥವಾ ನಾಮಿನಿಗಳ ಹೆಸರು ವ ಪತ್ತೆ | ನೌಕರನ ಕೂಡ ಇದ್ದ ಸಂಬಂಧ | ಸಜ್ಞಾನ ಅಥವಾ ಅಜ್ಞಾನ ಅಜ್ಞಾನ ಇದ್ದರೆ ಆತನ ಅಥವಾ ಅವಳ ವಯಸ್ಸು | ಠೇವಿನ ಹಿಶೆಗಳ ರಕಮು |
|---|---|---|---|
| ೧ | ೨ | ೩ | ೪ |

ಸ್ಥಳ:— ನೌಕರನ ಸಹಿ

ತಾರೀಖು: ಸಹಿಗೆ ಎರಡು ಸಾಕ್ಷಿ

ನಮ್ಮಲ್ಲಿ ಗ್ರಾಮ ಪಂಚಾಯತಿಗೆ ಬೇಕಾಗುವ ಎಲ್ಲ ನಮೂನೆಯ ಫಾರ್ಮುಗಳು, ಪಾವತಿ ಬುಕ್ಕುಗಳು, ಬಿಲ್ಲು ಬುಕ್ಕುಗಳು, ರಜಿಸ್ಟರ ಬುಕ್ಕುಗಳು, ಸ್ಟೇಶನರಿ ಸಾಮಾನುಗಳು, ಇನ್ನಿತರ ಕತೆ ಕಾದಂಬರಿ ಪುಸ್ತಕಗಳು ಯೋಗ್ಯ ಬೆಲೆಗೆ ದೊರೆಯುತ್ತವೆ. ಏನು ಬೇಕಾದರೂ ವಿಚಾರಿಸಿರಿ.



---


ಮುದ್ರಕರು :
ಜಿ. ಎನ್. ಹುದ್ದಾರ
ಭಾರತ ಮುದ್ರಣಾಲಯ,
ಧಾರವಾಡ.

ಪ್ರಕಾಶಕರು :
ಎಚ್ ಎನ್. ಹುದ್ದಾರ
ಭಾರತ ಬುಕ್ ಡಿಪೊ,
ಧಾರವಾಡ.